# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1118
ವಿಧಾನ ಪರಿಷತ್ ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು
ಉತ್ತರಿಸಬೇಕಾದ ದಿನಾಂಕ : 29.09.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೇಂದ್ರ ಸರ್ಕಾರದ ಮಹತ್ವಾಕಾಂಕ್ಷಿ ಯೋಜನೆಯಾದ ಆತ್ಮನಿರ್ಭರ ಭಾರತ್ ಯೋಜನೆಯನ್ನು ರಾಜ್ಯದಲ್ಲಿ ಅನುಷ್ಠಾನಗೊಳಿಸಲು ಸರ್ಕಾರವು ಯಾವ ಯಾವ ಕ್ರಮಗಳನ್ನು ಕೈಗೊಂಡಿದೆ; | ಕೇಂದ್ರ ಸರ್ಕಾರದ ಆತ್ಮ ನಿರ್ಭರ ಭಾರತ್ ಯೋಜನೆಯಡಿಯಲ್ಲಿ ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ಸಾಲ ಪಡೆದ ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳಿಗೆ "ಗ್ಯಾರಂಟೀಡ್ ಎಮರ್ಜೆನ್ಸಿ ಕ್ರೆಡಿಟ್ ಲೈನ್ ಲೋನ್" ಯೋಜನೆಯನ್ನು ಜಾರಿಗೆ ತಂದಿರುತ್ತದೆ. ಈ ಯೋಜನೆಯ ಪ್ರಕಾರ ಫೆಬ್ರವರಿ 29, 2020 ರಂದು ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ಸಾಲ ಪಡೆದ ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳ ಬಾಕಿ ಇರುವ ಮೊತ್ತ ರೂ.25 ಕೋಟಿಗಿಂತ ಕಡಿಮೆ ಇದ್ದಲ್ಲಿ ಅಂತಹ ಘಟಕಗಳಿಗೆ ಈ ಬಾಕಿ ಮೊತ್ತದ ಶೇ 20% ರಷ್ಟು ಮೊತ್ತವನ್ನು ಹೆಚ್ಚುವರಿ ಸಾಲವಾಗಿ ಯಾವುದೇ ಹೊಸ ಭದ್ರತೆ ಇಲ್ಲದೇ ನೀಡಲಾಗುವುದು. ಇದರ ಗರಿಷ್ಟ ಮೊತ್ತ ರೂ.5.00 ಕೋಟಿ ಆಗಿರುತ್ತದೆ. ಈ ಸಾಲವನ್ನು 4 ವರ್ಷಗಳಲ್ಲಿ ಪಾವತಿಸಬೇಕಾಗುತ್ತದೆ. ಬಡ್ಡಿದರವು ರೂ.9.25% ಆಗಿರುತ್ತದೆ.<br><br>ಈ ಯೋಜನೆಯಡಿಯಲ್ಲಿ ಕರ್ನಾಟಕದಲ್ಲಿ ಒಟ್ಟು 2,83,583 ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳು ರೂ.10,41,982.04 ಲಕ್ಷಗಳ "ಜಿ.ಇ.ಸಿ.ಎಲ್" ಸಾಲ ಪಡೆಯಲು ಅರ್ಹತೆಯನ್ನು ಹೊಂದಿದ್ದು, ಇದುವರೆಗೆ 1,30,993 ಘಟಕಗಳಿಗೆ ರೂ.5,68,122.81 ಲಕ್ಷಗಳ ಸಾಲವನ್ನು ವಿತರಿಸಲಾಗಿದೆ. |
| ಆ) | ಸದರಿ ಯೋಜನೆಯಡಿಯಲ್ಲಿ ಯಾವ ಯಾವ ಕಾರ್ಯಕ್ರಮಗಳನ್ನು ಸರ್ಕಾರದ ವತಿಯಿಂದ ಹಾಕಿಕೊಳ್ಳಲಾಗಿದೆ; | |
| ಇ) | ರಾಜ್ಯದ ಯಾವ ಯಾವ ಜಿಲ್ಲೆಗಳಲ್ಲಿ ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಯೋಜನೆ ರೂಪಿಸಲಾಗಿದೆ; | ಈ ಯೋಜನೆಯು ಭಾರತ ಸರ್ಕಾರದ ಯೋಜನೆಯಾಗಿದ್ದು, ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ಅನ್ವಯಿಸುತ್ತದೆ. |
| ಈ) | ಸದರಿ ಯೋಜನೆಗೆ ಎಷ್ಟು ಹಣವನ್ನು ಮೀಸಲಿಡಲಾಗಿದೆ? | ಈ ಯೋಜನೆಗೆ ರಾಜ್ಯ ಸರ್ಕಾರದಿಂದ ಯಾವುದೇ ಅನುದಾನ ನೀಡಲಾಗುವುದಿಲ್ಲ. ಎಂ.ಎಸ್.ಎಂ.ಇ ಗಳಿಗೆ ನೀಡಬೇಕಾದ ಹೆಚ್ಚುವರಿ ಸಾಲವನ್ನು ಬ್ಯಾಂಕ್‌ಗಳೇ ತಮ್ಮ ನಿಧಿಯಿಂದ ನೀಡಬೇಕಾಗುತ್ತದೆ. |

(ಜಗದೀಶ್ ಶೆಟ್ಟರ್)
ಬೃಹತ್ ಮತ್ತು ಕೈಗಾರಿಕಾ ಸಚಿವರು